

ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 210 |
| ಸದಸ್ಯರ ಹೆಸರು | : | ಶ್ರೀ ಯು.ಬಿ. ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 02-02-2021 |
| ಉತ್ತರಿಸುವ ಸಚಿವರು | : | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಕಾರ್ಖಾನೆಗಳ ಸಂಖ್ಯೆ ಎಷ್ಟು; ಈ ಪೈಕಿ ಎಷ್ಟು ಕಾರ್ಖಾನೆಗಳನ್ನು ಗುತ್ತಿಗೆಗೆ ನೀಡಲಾಗಿದೆ. | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಈ ಕೆಳಕಂಡ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿದೆ.<br><br>**ಮೈಸೂರು ಕಾಗದ ಕಾರ್ಖಾನೆ ನಿಯಮಿತ:**<br><br>ಮೈಸೂರು ಕಾಗದ ಕಾರ್ಖಾನೆಯು ರಾಜ್ಯ ಸರ್ಕಾರದ ಒಂದು ಉದ್ದಿಮೆಯಾಗಿದ್ದು, ಸಂಸ್ಥೆಯು ತೀವ್ರತರಹದ ಹಣಕಾಸಿನ ಸಮಸ್ಯೆಯನ್ನು ಎದುರಿಸುತ್ತಿದ್ದು, ಇಲ್ಲಿಯವರೆಗೆ ಒಟ್ಟು ಸಂಚಿತ ನಷ್ಟ 1194.17 ಕೋಟಿ ರೂ.ಗಳಷ್ಟು ಆಗಿದ್ದು ಸರ್ಕಾರವು ಕಾರ್ಖಾನೆಯನ್ನು ಪುನರುಜ್ಜೀವನಗೊಳಿಸಲು ಸಾಧ್ಯವಿಲ್ಲವೆಂದು ತೀರ್ಮಾನಿಸಿ ಕಾರ್ಖಾನೆಯ ಕಾರ್ಯಚಟುವಟಿಕೆಗಳನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದಲ್ಲಿ ನೀಡಬೇಕೆಂದು ತೀರ್ಮಾನ ಕೈಗೊಂಡು, ಕಾರ್ಖಾನೆಯ ಎಲ್ಲಾ ಉತ್ಪಾದನಾ ಘಟಕಗಳನ್ನು ದಿನಾಂಕ: 21.11.2015 ರಿಂದ ಸ್ಥಗಿತಗೊಳಿಸಲಾಗಿರುತ್ತದೆ. ಕಾರ್ಖಾನೆಯ ಕಾರ್ಯ-ಚಟುವಟಿಕೆಗಳನ್ನು ಖಾಸಗಿ ಸಂಸ್ಥೆಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡುವ ಕಾರ್ಯ ಪ್ರಗತಿಯಲ್ಲಿದೆ.<br><br>**ಮೈಸೂರು ಸಕ್ಕರೆ ಕಂಪನಿ ನಿಯಮಿತ:**<br><br>ಮೈಸೂರು ಸಕ್ಕರೆ ಕಂಪನಿ ನಿ., ಮಂಡ್ಯ, ಈ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ದೃಷ್ಟಿಯಿಂದ ದೀರ್ಘಾವಧಿಯ ಮೇಲೆ ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಸರ್ಕಾರದ ಅನುಮತಿಯನ್ನು ನೀಡಲಾಗಿದ್ದು, ಗುತ್ತಿಗೆ ನೀಡುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ) | ಗುತ್ತಿಗೆ ನೀಡಲು ಅನುಸರಿಸುತ್ತಿರುವ ಮಾನ ದಂಡಗಳೇನು? | **ಮೈಸೂರು ಕಾಗದ ಕಾರ್ಖಾನೆ ನಿಯಮಿತ:**<br><br>ಮೈಸೂರು ಕಾಗದ ಕಾರ್ಖಾನೆಯ ಕಾರ್ಯಾಚರಣೆಗಳನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ವ್ಯವಹಾರಿಕ ಸಲಹೆಗಾರರಾಗಿ M/s. Infrastructure Development Corporation, Karnataka ಇವರನ್ನು ನೇಮಿಸಲಾಗಿದ್ದು. ಆ ಸಂಸ್ಥೆಯು ಚರ್ಚೆಯ ನಂತರ Request for Proposal and Lease deed ಕರಡು ಪ್ರತಿಯನ್ನು ಈ ಕೆಳಕಂಡ ಪ್ರಮುಖ ಅಂಶಗಳೊಂದಿಗೆ ಸಿದ್ಧಪಡಿಸಲಾಗಿದೆ:- |

1. ಗುತ್ತಿಗೆ ಕರಾರು ಒಪ್ಪಂದವು 40 ವರ್ಷಗಳ ಕಾಲಮಿತಿಯಾಗಿದ್ದು ತದನಂತರ 40 ವರ್ಷಗಳಿಗೆ ಪರಸ್ಪರ ಒಡಂಬಡಿಕೆಯಂತಿರುತ್ತದೆ.
2. ಗುತ್ತಿಗೆ ಬಾಡಿಗೆಯನ್ನು ಪ್ರತಿ 03 ವರ್ಷಗಳಿಗೊಮ್ಮೆ ಶೇ.10 ರಷ್ಟು ಹೆಚ್ಚುವರಿ ಮಾಡಲಾಗುತ್ತದೆ.
3. ಗುತ್ತಿಗೆದಾರರು ಗುತ್ತಿಗೆ ಒಪ್ಪಂದಕ್ಕೆ ಸಹಿ ಮಾಡಿದ 02 ವರ್ಷಗಳೊಳಗೆ ರೂ.500 ಕೋಟಿಗಳನ್ನು ಹಾಗೂ ರೂ.500 ಕೋಟಿಗಳನ್ನು ಇನ್ನೆರಡು ವರ್ಷದ ಒಳಗೆ ಹೂಡಿಕೆ ಮಾಡಬೇಕು ಅಂದರೆ, 04 ವರ್ಷದಲ್ಲಿ ರೂ.1000 ಕೋಟಿ.
4. 750 ಮಂದಿಗೆ ಉದ್ಯೋಗ ಸೃಷ್ಟಿಸಬೇಕು.
5. ಗುತ್ತಿಗೆದಾರರು ಮೈಸೂರು ಕಾಗದ ಕಾರ್ಖಾನೆಯ ಅರಣ್ಯ ಪ್ರದೇಶದಲ್ಲಿ ಬೆಳೆದ 2 ಲಕ್ಷ ಮೆಟ್ರಿಕ್ ಟನ್ Pulp wood ನ್ನು ಉಭಯತ್ರಯರ ಒಪ್ಪಂದದಂತೆ ಮಾರುಕಟ್ಟೆಯ ದರದಲ್ಲಿ ಶೇ.20ರವರೆಗೆ ರಿಯಾಯಿತಿಯನ್ನು ಆಡಳಿತ ಮಂಡಳಿಯ ಅನುಮೋದನೆಗೆ ಒಳಪಟ್ಟು ಖರೀದಿಸಬೇಕು.
6. ಗುತ್ತಿಗೆದಾರರು ಈಗಿರುವ ಕಾರ್ಖಾನೆಯ ಆವರಣವನ್ನು ಉಪಯೋಗಿಸಿಕೊಂಡು ತಿರುಳು ಅಥವಾ ಕಾಗದವನ್ನು ಉತ್ಪಾದಿಸಬೇಕು ಮತ್ತು ಗುತ್ತಿಗೆದಾರರು ವಸತಿ ಪ್ರದೇಶವನ್ನು ಅನುಗತ ಘಟಕಗಳನ್ನುಸ್ಥಾಪಿಸಲು ಉಪಯೋಗಿಸಬಹುದು.

**ಮೈಸೂರು ಸಕ್ಕರೆ ಕಂಪನಿ ನಿಯಮಿತ:**

ಕಾರ್ಖಾನೆಗಳು ದುಡಿಯುವ ಬಂಡವಾಳದ ಕೊರತೆ, ಆಡಳಿತಾತ್ಮಕ ಅನಾನುಕೂಲಗಳು, ಆರ್ಥಿಕ ಸಂಕಷ್ಟ ಹಾಗೂ ಇನ್ನಿತರೆ ಕಾರಣಗಳಿಂದಾಗಿ ಸ್ಥಗಿತಗೊಂಡಿದ್ದಲ್ಲಿ, ಅಂತಹ ಕಾರ್ಖಾನೆಗಳನ್ನು ಕಬ್ಬು ಬೆಳೆಗಾರ ರೈತರ ಮತ್ತು ಕಾರ್ಮಿಕರ ಹಿತದೃಷ್ಟಿಯಿಂದ ಖಾಸಗಿಯವರಿಗೆ ದೀರ್ಘಾವಧಿಯ ಮೇಲೆ "ಇದ್ದಲ್ಲಿ ಇದ್ದಂತೆಯೇ" ಎಲ್.ಆರ್.ಒ.ಟಿ. ಆಧಾರದ ಮೇಲೆ ಗುತ್ತಿಗೆ ನೀಡುವುದರ ಮೂಲಕ ಪುನಶ್ಚೇತನಗೊಳಿಸುತ್ತಿದೆ.

ಕಾರ್ಖಾನೆಗಳನ್ನು ಗುತ್ತಿಗೆ ನೀಡುವ ಪೂರ್ವದಲ್ಲಿ ಸಂಬಂಧಪಟ್ಟ ಕಾರ್ಖಾನೆಯ ಸರ್ವ ಸದಸ್ಯರ ಸಾಮಾನ್ಯ ಸಭೆ ಮತ್ತು ಆಡಳಿತ ಮಂಡಳಿ ಸಭೆಯಲ್ಲಿ ಗುತ್ತಿಗೆ ನೀಡುವ ಸಂಬಂಧ

| | | |
|---|---|---|
| | | ನಿರ್ಣಯ ಅಂಗೀಕರಿಸಲಾಗುತ್ತದೆ. ತದನಂತರ ಕಾರ್ಖಾನೆಯಿಂದ ಪ್ರಸ್ತಾವನೆ ಬಂದ ನಂತರ ಸರ್ಕಾರದ ಅನುಮತಿಯನ್ನು ನೀಡಲಾಗುತ್ತದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 1999 ಮತ್ತು ನಿಯಮ 2000 ರನ್ವಯ ಕಾರ್ಖಾನೆಯನ್ನು ಗುತ್ತಿಗೆ ನೀಡುವ ಸಂಬಂಧ ಟೆಂಡರ್ ಪ್ರಕಟಣೆಯನ್ನು ಕೈಗೊಳ್ಳಲಾಗುತ್ತದೆ. ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವಾಗ ಕಬ್ಬು ಬೆಳೆಗಾರ ರೈತರ ಮತ್ತು ಕಾರ್ಮಿಕರ ಹಿತಾಸಕ್ತಿಯನ್ನು ಗಮನದಲ್ಲಿಟ್ಟು ಕ್ರಮ ಕೈಗೊಳ್ಳಲಾಗುವುದು. |

ಸಿಐ 03 ಸಿಪಿಐ 2021 (ಇ)

(ಜಗದೀಶ ಶೆಟ್ಟರ),
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು.